ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಹಕ್ಕು ಪತ್ರ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

39 (400) ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಬೆಂಗಳೂರು ನಗರ ಜಿಲ್ಲೆ, ಉತ್ತರ ತಾಲ್ಲೂಕು ಹೆಸರುಘಟ್ಟ ಹೋಬಳಿ ಸೊಣ್ಣೇನಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಕಾಕೋಳು ಗ್ರಾಮಸ್ಥರಿಗೆ ಹಕ್ಕುಪತ್ರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಸದರಿ ಗ್ರಾಮದಲ್ಲಿ 1979ರಲ್ಲಿ 28ನೆಯ ಸ್ವಾತಂತ್ರ ವಾರ್ಷಿಕೋತ್ಸವ ಸಮಾರಂಭದ ಅಂಗವಾಗಿ ಹಕ್ಕುಪತ್ರ ನೀಡಿದ್ದು, ಆನಂತರ ಕೆಲವರಿಂದ ವಾಪಸ್ ಪಡೆದು, ಮರಳಿ ನೀಡದಿರುವುದರಿಂದ ಸರ್ಕಾರಕ್ಕಿದ್ದ ತೊಡಕುಗಳೇನು ; 1979ರಲ್ಲಿ ಇದ್ದಂತೆ ಫಲಾನುಭವಿಗಳ ಒಟ್ಟು ಸಂಖ್ಯೆ ಎಷ್ಟು ; (ಫಲಾನುಭವಿವಾರು ವಿವರ ನೀಡುವುದು)

(ಇ) ಸದರಿ ನಿವೇಶನದಲ್ಲಿ ಹಾಲಿ ಮನೆ ಕಟ್ಟಿಕೊಂಡು ವಾಸವಿರುವ ನಿವಾಸಿಗಳು ಹಕ್ಕುಪತ್ರಗಳಿಲ್ಲದೆ ತಮ್ಮ ಹೆಸರುಗಳಿಗೆ ಖಾತೆ ಮಾಡಿಸಿಕೊಳ್ಳಲು ಮೂಲ ದಾಖಲಾತಿಗಳನ್ನು ನೀಡಲು ಯಾವಾಗ ಕ್ರಮಕೈಗೊಳ್ಳಲಾಗುವುದು ;

(ಈ) ಸದರಿ ಗ್ರಾಮದ ನಿವಾಸಿಗಳಿಗೆ ಹಕ್ಕುಪತ್ರ ವಿತರಣೆ ಮಾಡಲು ಸರ್ಕಾರ ಹಮ್ಮಿಕೊಂಡಿರುವ ಮುಂಜಾಗ್ರತಾ ಕ್ರಮಗಳೇನು ?